## ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | : | 258 |
| ಸದಸ್ಯರ ಹೆಸರು | : | ಶ್ರೀ. ಹೆಚ್.ಎಂ. ರಮೇಶ್‌ಗೌಡ<br>(ವಿಧಾನಸಭಾ ಕ್ಷೇತ್ರದಿಂದ ಚುನಾಯಿತರಾದವರು) |
| ಉತ್ತರಿಸುವ ದಿನಾಂಕಃ | : | 09.12.2020 |
| ಉತ್ತರಿಸುವ ಸಚಿವರು: | : | ಮಾನ್ಯ ಉಪ ಮುಖ್ಯಮಂತ್ರಿಯವರು<br>ಲೋಕೋಪಯೋಗಿ ಇಲಾಖೆ |

| ಕ್ರ.ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ರಾಜ್ಯಾದಾದ್ಯಂತ ಬೃಹತ್ ಹೆದ್ದಾರಿಗಳ ನಿರ್ಮಾಣಕ್ಕಾಗಿ ಹಾಗೂ ಎಕ್ಸ್ ಪ್ರೆಸ್ ಕಾರಿಡಾರ್ ನಿರ್ಮಾಣಕ್ಕಾಗಿ ಹಾಲಿ ಇರುವ ರಸ್ತೆಗಳನ್ನು ಅಗೆದು ಹಾಕಲಾಗಿದ್ದು, ಕಾಮಗಾರಿ ನಿಧಾನಗತಿಯಲ್ಲಿ ಸಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಗಮನಕ್ಕೆ ಬಂದಿದೆ. ಹಾಲಿ ಇರುವ ರಸ್ತೆಗಳನ್ನು ಅವಶ್ಯವಿದ್ದ ಸ್ಥಳಗಳಲ್ಲಿ ಪ್ರಸ್ತಾಪಿತ ರಸ್ತೆ ಪಂಕ್ತೀಕರಣದ ಡಿಸೈನ್ಡ್ ಪ್ರೊಫೈಲ್ ಪ್ರಕಾರ ನಿರ್ಮಿಸಲು ಅಗೆಯಲಾಗುತ್ತದೆ. ಅಗೆದ ನಂತರ ಕೂಡಲೇ ಕಾಮಗಾರಿ ಪೂರ್ಣಗೊಳಿಸಲು ಅಗತ್ಯ ಕ್ರಮ ವಹಿಸಲಾಗುತ್ತಿದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |
| ಆ. | ಬಂದಿದ್ದಲ್ಲಿ ಶೀಘ್ರವಾಗಿ ರಸ್ತೆ ಕಾಮಗಾರಿ ಪೂರ್ಣಗೊಳಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | |
| ಇ. | ಕಳೆದ ಎರಡು ವರ್ಷಗಳಿಂದ ಬೆಂಗಳೂರು–ಮಂಗಳೂರು ಹೆದ್ದಾರಿಯಲ್ಲಿ ಹಾಸನದಿಂದ ಸಕಲೇಶಪುರ ಮಾರ್ಗ ಸಂಪೂರ್ಣ ಹಾಳಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾ.ಹೆ.–75 ಹೆದ್ದಾರಿ ಕಾಮಗಾರಿಗಳಿಗೆ ಸಂಬಂಧಿಸಿದಂತೆ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ಕೆಳಗಿನಂತೆ ವರದಿಸಿರುತ್ತಾರೆ. ಹಾಲಿ ಇರುವ ಹಾಸನ – ಸಕಲೇಶಪುರ ಮಾರ್ಗದ ರಸ್ತೆ ನಿರ್ವಹಣೆ ಕಾಮಗಾರಿಯು ಗುತ್ತಿಗೆದಾರರು/ ಉಪ – ಗುತ್ತಿಗೆದಾರರಿಂದ ಕೈಗೊಳ್ಳಲಾಗುತ್ತಿದ್ದು, ಶೇಕಡ 85 ರಷ್ಟು ಕಾಮಗಾರಿ ಪೂರ್ಣಗೊಂಡಿರುತ್ತದೆ ಹಾಗೂ ಬಾಕಿ ಉಳಿದ ಕಾಮಗಾರಿಯನ್ನು ಒಂದು ವಾರದೊಳಗೆ ಪೂರ್ಣಗೊಳಿಸ ಲಾಗುವುದು. ಮುಂದುವರೆದು, ರಸ್ತೆಯು ವಾಹನ ಸಂಚಾರಕ್ಕೆ ಯೋಗ್ಯವಾಗಿರುತ್ತದೆ. ಪರಿಷ್ಕೃತ ಯೋಜನಾ ಕಾರ್ಯಕ್ರಮದಂತೆ, ಹಾಸನ – ಸಕಲೇಶಪುರ ರಸ್ತೆ ಕಾಮಗಾರಿಯು ದಿನಾಂಕಃ 10–03–2022 ರ ವೇಳೆಗೆ ಪೂರ್ಣಗೊಳ್ಳುವ ಸಾಧ್ಯತೆ ಇರುತ್ತದೆ ಎಂದು ಭಾರತೀಯ ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದವರು ವರದಿಸಿರುತ್ತಾರೆ. |
| ಈ. | ಬಂದಿದ್ದಲ್ಲಿ ಸದರಿ ಕಾಮಗಾರಿಯನ್ನು ಪೂರ್ಣಗೊಳಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ; ಈ ಎರಡೂ ಯೋಜನೆಗಳನ್ನು ಪೂರ್ಣಗೊಳಿಸಲು ಅಂತಿಮ ಕಾಲಮಿತಿ ನಿಗದಿಪಡಿಸಲಾಗಿದೆಯೇ? (ಮಾಹಿತಿ ನೀಡುವುದು) | |

ಕಡತ ಸಂಖ್ಯೆ: ಲೋಇ 243 ಸಿಎನ್‌ಹೆಚ್ 2020 (ಇ)

(ಗೋವಿಂದ.ಎಂ.ಕಾರಜೋಳ)
ಉಪ ಮುಖ್ಯಮಂತ್ರಿ,
ಲೋಕೋಪಯೋಗಿ ಇಲಾಖೆ

| | | |
|---|---|---|
| | | ಮೇಲೆ ಪಡೆಯಲಾಗಿದೆ.<br>ಪ್ರಧಾನಮಂತ್ರಿ ಕೃಷಿ ಸಿಂಚಾಯಿ ಯೋಜನೆ (IWMP) ಅಡಿಯಲ್ಲಿ ಕಾರ್ಯಕ್ರಮದಂತೆ ಯೋಜನೆಯನ್ನು ಅನುಷ್ಠಾನಗೊಳಿಸಲು ಬೇಕಾಗಿರುವ ಲೆಕ್ಕ ಸಹಾಯಕರನ್ನು ತಾತ್ಕಾಲಿಕವಾಗಿ ಹೊರಗುತ್ತಿಗೆ ಸಂಸ್ಥೆ ಮೂಲಕ ನಿಯಮಾನುಸಾರ ಸೇವೆಯನ್ನು ಪಡೆಯಲಾಗಿರುತ್ತದೆ.<br>ಸದರಿ ಹೊರಗುತ್ತಿಗೆ ಸಿಬ್ಬಂದಿಗಳ ಪರಿಶ್ರಮಧನ ಬಾಬ್ತನ್ನು ಲೆಕ್ಕ ಶೀರ್ಷಿಕೆ 2402-00-102-0-30 ರಡಿ ಯೋಜನೆಯ ಆಡಳಿತ ವೆಚ್ಚದಲ್ಲಿ ಭರಿಸಲಾಗಿದೆ. |
| ಆ) | ಈ ರೀತಿ ನೇಮಕ ಮಾಡಿಕೊಂಡ ನೌಕರರನ್ನು ಖಾಯಂಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಇದಕ್ಕೆ ಯಾವ ಮಾನದಂಡಗಳನ್ನು ರೂಪಿಸಲಾಗಿದೆ; | ಯಾವುದೇ ನೇಮಕಾತಿ ಇಲ್ಲದಿರುವುದರಿಂದ ಖಾಯಂಗೊಳಿಸುವ ಪ್ರಸ್ತಾವನೆ ಅನ್ವಯಿಸುವುದಿಲ್ಲ. |
| ಇ) | ಕೃಷಿ ಇಲಾಖೆಯಲ್ಲಿ ಈ ರೀತಿ ಖಾಲಿ ಇರುವ ಹುದ್ದೆಗಳಿಗೆ ನೇಮಕ ಮಾಡಿಕೊಳ್ಳುವ ಪ್ರಕ್ರಿಯೆ ಇದೆಯೇ; ಇದ್ದಲ್ಲಿ, ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಲೆಕ್ಕ ಸಹಾಯಕರನ್ನು ನೇಮಕ ಮಾಡಿಕೊಳ್ಳಲು ಇರುವ ತೊಡಕುಗಳೇನು? | ಕೃಷಿ ಇಲಾಖೆಯಲ್ಲಿ ಪ್ರಸ್ತುತ ಚಾಲ್ತಿ ಇರುವ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಲೆಕ್ಕ ಸಹಾಯಕರ ಹುದ್ದೆಯು ಮಂಜೂರಾಗಿರುವುದಿಲ್ಲ. |

AGRI-ASC/65/2020

(ಬಿ.ಸಿ.ಪಾಟೀಲ್)
ಕೃಷಿ ಸಚಿವರು